ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 431

ಸದಸ್ಯರ ಹೆಸರು: ಶ್ರೀ ಎನ್. ರವಿಕುಮಾರ್,

(ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ: 04.02.2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

| ಉಪ ಪ್ರಶ್ನೆ | ಉತ್ತರ |
|---|---|
| ಅ) ಭ್ರಷ್ಟಾಚಾರ, ಅಕ್ರಮ ಅವ್ಯವಹಾರಗಳಲ್ಲಿ ಭಾಗಿಯಾಗಿರುವ ಐ.ಎ.ಎಸ್ ಮತ್ತು ಐ.ಪಿ..ಎಸ್ ಅಧಿಕಾರಿಗಳನ್ನು ಸರ್ಕಾರದ ಆಯಕಟ್ಟಿನ ಪ್ರಮುಖ ಸ್ಥಳಗಳಲ್ಲಿ ನಿಯುಕ್ತಿಗೊಳಿಸುವುದರಿಂದ ಸರ್ಕಾರದ ಘನತೆ, ಗೌರವ ಮತ್ತು ರಾಜ್ಯದ ಜನತೆ ಸರ್ಕಾರದ ಮೇಲೆ ಇಟ್ಟಿರುವ ವಿಶ್ವಾಸಕ್ಕೆ ಕುಂದುಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಆಡಳಿತಾತ್ಮಕ ದೃಷ್ಟಿಯಿಂದ ಹುದ್ದೆಗಳನ್ನು ಸೃಜಿಸಲಾಗಿದ್ದು, ಇವುಗಳಲ್ಲಿ ಯಾವುದೇ ವರ್ಗೀಕರಣ ಇರುವುದಿಲ್ಲ.<br>ಐ.ಎಂ.ಎ ಪ್ರಕರಣಕ್ಕೆ ಸಂಬಂಧಿಸಿದ ಘಟನೆಗಳು ಜರುಗಿದಾಗ ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದ ಹುದ್ದೆಗಳಿಂದ ಇತರೆ ಹುದ್ದೆಗಳಿಗೆ ವರ್ಗಾಹಿಸಲಾಗಿದೆ ಆದುದರಿಂದ ಪ್ರಶ್ನೆ ಉದ್ಭವಿಸುವುದಿಲ್ಲ. |
| ಆ) ಐ.ಎಂ.ಎ., ಹಗರಣದಲ್ಲಿ ನೇರವಾಗಿ ಭಾಗಿಯಾಗಿರುವ ಕುರಿತು ಸಿ.ಬಿಐ., ನಿಂದ ಕೋರ್ಟ್‌ಗೆ ಆರೋಪ ಪಟ್ಟಿ ಸಲ್ಲಿಕೆಯಾಗಿರುವ ಐ.ಎ.ಎಸ್ ಮತ್ತು ಐ.ಪಿ.ಎಸ್ ಅಧಿಕಾರಿಗಳ ಮೇಲೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; ಸದರಿ ಅಧಿಕಾರಿಗಳನ್ನು ಆಯಕಟ್ಟಿನ ಜಾಗಕ್ಕೆ ನೇಮಿಸಲು ಕಾರಣಗಳೇನು; ಇದರಿಂದ ಐ.ಎಂ.ಎ., ಹಗರಣದ ತನಿಖೆ ಮತ್ತು ಸಾಕ್ಷಿಗಳ ಮೇಲೆ ವ್ಯತಿರಿಕ್ತ ಪರಿಣಾಮ ಬೀರುವುದಿಲ್ಲವೆ; ಈ ಕುರಿತು ಸರ್ಕಾರದ ನಿಲುವೇನು: | ಈ ಪ್ರಕರಣದಲ್ಲಿ ಆರೋಪಿತರೆಂದು ಸಿಬಿಐ ವರದಿಯಲ್ಲಿ ತಿಳಿಸಲಾಗಿರುವ ಅಧಿಕಾರಿಗಳನ್ನು ಅಭಿಯೋಜನೆಗೆ ಒಳಪಡಿಸಲು ಸರ್ಕಾರದಿಂದ ಅಭಿಯೋಜನಾ ಮಂಜೂರಾತಿ ನೀಡಲಾಗಿದೆ ಮತ್ತು ಭ್ರಷ್ಟಾಚಾರ ನಿಗ್ರಹ ಕಾಯ್ದೆ ಅಡಿಯಲ್ಲಿ ಪ್ರಕರಣದ ತನಿಖೆಯನ್ನು ಕೈಗೊಳ್ಳಲು ಸದರಿ ಕಾಯ್ದೆಯ 17(ಎ) ಅಡಿಯಲ್ಲಿ ಸಿಬಿಐ ಸಂಸ್ಥೆಗೆ ಮಂಜೂರಾತಿ ನೀಡಲಾಗಿದೆ.<br>ಐ.ಎಂ.ಎ ಪ್ರಕರಣಕ್ಕೆ ಸಂಬಂಧಿಸಿದ ಘಟನೆಗಳು ಜರುಗಿದಾಗ ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದ ಹುದ್ದೆಗಳಿಂದ ಇತರೆ ಹುದ್ದೆಗಳಿಗೆ ವರ್ಗಾಹಿಸಲಾಗಿದೆ. |
| ಇ) ಐ.ಎಂ.ಎ., ಹಗರಣದಲ್ಲಿ ನೇರವಾಗಿ ಭಾಗಿಯಾಗಿರುವ ಕುರಿತು ಸಿ.ಬಿಐ., ನಿಂದ ಕೋರ್ಟ್‌ಗೆ ಆರೋಪ ಪಟ್ಟಿ ಸಲ್ಲಿಕೆಯಾಗಿರುವ ಐ.ಎ.ಎಸ್ | ಐ.ಎಂ.ಎ ಪ್ರಕರಣದಲ್ಲಿ ಆರೋಪಿತರಾದ ಐ.ಎ.ಎಸ್ ಅಧಿಕಾರಿಯಾದ ಶ್ರೀ ಬಿ.ಎಂ. ವಿಜಯ್ ಶಂಕರ್ ಇವರನ್ನು 48 ಗಂಟೆಗಿಂತಲೂ ಹೆಚ್ಚಿನ ಅವಧಿಗೆ |

| | |
|---|---|
| ಮತ್ತು ಐ.ಪಿ.ಎಸ್ ಅಧಿಕಾರಿಗಳನ್ನು ಅಮಾನತ್ತುಗೊಳಿಸದಿರಲು ಕಾರಣವೇನು; ಯಾವಾಗ ಅಮಾನತ್ತುಗೊಳಿಸಲಾಗುವುದು; | ನ್ಯಾಯಾಂಗ ಬಂಧನದಲ್ಲಿಟ್ಟಿದ್ದರಿಂದ ಅಖಿಲ ಭಾರತ ಸೇವೆಗಳು (ಶಿಸ್ತು ಪ್ರಕರಣ ಮತ್ತು ಮೇಲ್ಮನವಿ) ನಿಯಮಗಳು 1969 ರ ನಿಯಮ 3(2)(ಎ) ರಡಿ ಅಮಾನತ್ತುಗೊಳಿಸಲಾಗಿತ್ತು. ಪ್ರಸ್ತುತ, ಅಧಿಕಾರಿಯವರು ಮೃತರಾಗಿರುವುದರಿಂದ ಇವರ ವಿರುದ್ಧ ಮುಂದಿನ ಕ್ರಮ ಇರುವುದಿಲ್ಲ.<br><br>ಪ್ರಕರಣದಲ್ಲಿ ಆರೋಪಿತರಾಗಿರುವ ಐಪಿಎಸ್ ಅಧಿಕಾರಿಗಳ ವಿರುದ್ಧ ನ್ಯಾಯಾಲಯಕ್ಕೆ ಆರೋಪ ಪಟ್ಟಿಯನ್ನು ಸಿಬಿಐ ಸಂಸ್ಥೆ ಸಲ್ಲಿಸಿದ್ದು ಪ್ರಕರಣ ವಿಚಾರಣೆ ಹಂತದಲ್ಲಿರುತ್ತದೆ. |
| ಈ) ಐ.ಎಂ.ಎ ಹಗರಣದಲ್ಲಿ ಭಾಗಿಯಾಗಿರುವ ಮತ್ತು ಯಾವುದೇ ನಿರ್ಧಾರ ಮತ್ತು ಶಿಫಾರಸ್ಸುಗಳನ್ನು ಮಾಡಲು ಅಧಿಕಾರ ಹೊಂದಿರದ ಸರ್ಕಾರದ ಕೆಳ ಹಂತದ ಅಧಿಕಾರಿ ಮತ್ತು ಸಿಬ್ಬಂದಿಗಳನ್ನು ಅಮಾನತ್ತು ಮಾಡಿ ಇಲಾಖಾ ವಿಚಾರಣೆಗೆ ಒಳಪಡಿಸಲು ಆದೇಶಿಸಿದ ಸರ್ಕಾರ ಐ.ಪಿ.ಎಸ್ ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳಲು ಹಿಂಜರಿಯುತ್ತಿರುವುದು ಏಕೆ; ಈ ಕುರಿತು ಸರ್ಕಾರದ ನಿಲುವೇನು? | ಪ್ರಕರಣದಲ್ಲಿ ಭಾಗಿಯಾಗಿರುವ ಐಪಿಎಸ್ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಿ, ಪ್ರಥಮ ಹಂತದಲ್ಲಿ, ಆರೋಪ ಪಟ್ಟಿಯನ್ನು ಜಾರಿ ಮಾಡಲಾಗುತ್ತಿದೆ. |

ಸಂಖ್ಯೆ: ಇ-ಸಿಆಸುಇ 23 ಎಸ್‌ಪಿಎಸ್ 2021

(ಬಿ.ಎಸ್. ಯಡಿಯೂರಪ್ಪ)

ಮುಖ್ಯಮಂತ್ರಿ